## ಮಾರ್ಚ್ 2016

BANNERUGHATTA WILDLIFE CONSERVATION GROUP

* ಚಿಣ್ಣರ ವನದರ್ಶನ
* ಪರಾಗಸ್ಪರ್ಶಕಗಳೇ ಇಳುವರಿ ವರ್ಧಕಗಳು
* ಕಣ್ಣಾಮುಚ್ಚಾಲೆ
* ಇಂಗಾಲ (ಕವನ)
* ಪ್ರಕೃತಿ ಬಿಂಬ




ಲೇಖಕ ವೃಂದ

ನಾಗೇಶ್ .ಓ .ಎಸ್

ಜೈಕುಮಾರ್ .ಆರ್

ಸ್ಮಿತಾ ರಾವ್

ಕೃಷ್ಣನಾಯಕ್

ಕಾರ್ತಿಕ್ .ಎ .ಕೆ

ವಿನ್ಯಾಸ

ಅಶ್ವಥ .ಕೆ.ಎನ್

ಮುಖಪುಟ ಛಾಯಾಚಿತ್ರ

ಕಾರ್ತಿಕ್ .ಎ .ಕೆ

ಪರಿಷ್ಕರಣೆ

ಮುರಳಿ .ಎಸ್

# ಚಿಣ್ಣರ ವನದರ್ಶನ



ಸುತ್ತಲು ನಿಬಿಡವಾದ ಕಾಡು, ದೂರದ ದಿಗಂತದವರೆಗೂ ಬೆಳೆದು ನಿಂತಿರುವ ಪರ್ವತ ರಾಶಿ, ಪರ್ವತ ರಾಶಿಯ ಮೇಲೆ ಮಕ್ಕಳು ಆಟವಾಡುವಾಗ ಜೋಡಿಸಿರುವ ಕಡ್ಡಿಗಳ ಹಾಗೆ ನಿಂತಿರುವ ಮರಗಳು, ಎಲ್ಲವೂ ಮನಸ್ಸಿಗೆ ಏನೋ ಒಂದು ರೀತಿಯ ಮುದನೀಡುತ್ತಿತ್ತು. ಪ್ರಕೃತಿಯ ಸೌಂದರ್ಯವೇ ಅವರ್ಣನೀಯ, ಅದನ್ನು ನೋಡಿದರೆ ಸಾಕು ಉಲ್ಲಾಸ ನೆತ್ತಿಗೇರುವುದರಲ್ಲಿ ಅನುಮಾನವೇ ಇಲ್ಲ. ಇನ್ನು ನಾವು ಅದರ ಮಡಿಲಿನಲ್ಲಿಯೇ ಇದ್ದಾಗ ಸ್ವರ್ಗವೇ ನಮಗೆ ಕಾಣುವುದು. ಈ ವನದಾತೆಯ ಮಡಿಲಿಗೆ ನಮ್ಮನ್ನು ಕರೆತಂದದ್ದು ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆಯವರು, ಈ ವರ್ಷವಷ್ಟೇ ಶುರುಮಾಡಿರುವ “ಚಿಣ್ಣರ ವನದರ್ಶನ” ಎಂಬ ಕಾರ್ಯಕ್ರಮ. ಅರಣ್ಯ ಇಲಾಖೆಯ ಈ ಕಾರ್ಯಕ್ರಮವನ್ನು ಆಯೋಜಿಸಿಸಲು ನಮ್ಮ WCG ತಂಡಕ್ಕೆ ಸಿಕ್ಕಿದ್ದು ನಮ್ಮ ಭಾಗ್ಯವೇ ಎಂದೆನಬೇಕು. “ಬೆಳೆವ ಸಿರಿ ಮೊಳೆಕೆಯಲ್ಲಿ” ಎಂದು ನಂಬಿರುವ ನಮ್ಮ ತಂಡ ಪರಿಸರದ ಬಗ್ಗೆ ಮಕ್ಕಳಲ್ಲಿರುವ ಕೌತುಕತೆಯನ್ನು ಹಲವಾರು ಕಾರ್ಯಕ್ರಮಗಳ ಮುಖಾಂತರ ಉತ್ತೇಜಿಸುತ್ತಾ ಬಂದಿದೆ. ಆದರೆ ಅವೆಲ್ಲವುದಕ್ಕಿಂತ ಮಕ್ಕಳನ್ನು ನಿಸರ್ಗದೇವಿಯ ಮಡಿಲಿನಲ್ಲೇ ಆಡಲು ಕರೆತಂದು ಅದರ ಸಿಹಿಯುಣಿಸಿದ್ದು ಎಲ್ಲ ಕಾರ್ಯಕ್ರಮಗಳಿಗಿಂತ ಒಂದು ಕೈ ಮೇಲು ಎಂದೇ ಹೇಳಬೇಕು.

ಅರಣ್ಯ ಇಲಾಖೆಯವರ “ಚಿಣ್ಣರ ವನದರ್ಶನ” ಕಾರ್ಯಕ್ರಮದ ರಚನೆಯಂತೆ ನಾವು ಕನಕಪುರ ತಾಲ್ಲೂಕಿನ ಬನವಾಸಿ ಸರ್ಕಾರಿ ಪ್ರೌಢಶಾಲೆಯನ್ನು ಅಯ್ಕೆ ಮಾಡಿಕೊಂಡು 22ನೇ ಫೆಬ್ರವರಿಯಂದು ಬಿಳಿಗಿರಿರಂಗನ ಅಭಯಾರಣ್ಯಕ್ಕೆ ಕರೆತಂದವು. ಪಶ್ಚಿಮಘಟ್ಟವನ್ನು ಹಾಗೂ ಪೂರ್ವಘಟ್ಟವನ್ನು ಸೇರಿಸುವ ಈ ಪ್ರದೇಶವು ಬೇಸಿಗೆಯಲ್ಲಿ ಎಲೆ ಉದುರುವ ಕಾಡಿನಿಂದ ಹಿಡಿದು ವರ್ಷವಿಡೀ ಹಚ್ಚ ಹಸಿರಾಗಿರುವ ನಿತ್ಯಹರಿದ್ವರ್ಣದ ಕಾಡನ್ನು ಒಳಗೊಂಡಿರುವುದರಿಂದ ಎಲ್ಲಾ ರೀತಿಯ ಜೀವವೈವಿಧ್ಯವನ್ನು ಹೊಂದಿದೆ. ಈ ವಿಭಿನ್ನ



ಪರಿಸರವು ಈ ಪ್ರದೇಶದ ಒಂದು ವಿಶೇಷತೆಯಾದರೆ ಕ್ರಿಸ್ತ ಪೂರ್ವದಿಂದಲೂ ಮಾನವ ಇಲ್ಲಿ ನೆಲೆಯೂರಿದ್ದಾನೆ ಎಂಬುದು ಮತ್ತೊಂದು ವಿಶೇಷ. ಬಿಳಿಗಿರಿರಂಗಸ್ವಾಮಿ ವನ್ಯಪ್ರದೇಶವನ್ನು ಭಾರತ ಸರ್ಕಾರವು ಅಭಯಾರಣ್ಯವೆಂದು 1974 ರಲ್ಲೇ ಘೋಷಿಸಿ ಇಲ್ಲಿನ ವನಸಂಪತ್ತನ್ನು ಪೋಷಿಸುತ್ತಾ ಬಂದಿದೆಯಾದರೂ ಕಾಡುಗಳ್ಳ ವೀರಪ್ಪನ್ನಿಂದ ಹಲವಾರು ಪೆಟ್ಟುತಿಂದರೂ ಸಹ ತನ್ನ ಸೌಂದರ್ಯದ ಹುರುಪನ್ನು ಕಳೆದುಕೊಳ್ಳದೆ ಹಲವು ಜೀವಸಂಕುಲವನ್ನು ಕಾಪಾಡುತ್ತಲೇ ಬಂದಿದೆ. ಆದರೆ ಈ ಅಭಯಾರಣ್ಯವು ಪೂರ್ಣ ಪ್ರಮಾಣದಲ್ಲಿ ಜೀವಿಗಳಿಗೆ ನೆಲೆವೀಡಾದದ್ದು 2011ರಲ್ಲಿ ಭಾರತ ಸರ್ಕಾರವು "ಪ್ರಾಜೆಕ್ಟ್ ಟೈಗರ್" ಯೋಜನೆ ಅಡಿಯಲ್ಲಿ ಹುಲಿಸಂರಕ್ಷಿತಾ ಅರಣ್ಯಪ್ರದೇಶವೆಂದು ಘೋಷಣೆಯಾದಂದಿನಿಂದ. ಎಲ್ಲಾ ಅಧಿಕಾರಿಗಳ ಪ್ರಾಮಾಣಿಕ ಶ್ರಮದಿಂದ ನಮ್ಮ ರಾಷ್ಟ್ರಪ್ರಾಣಿಯ ಸಂಖ್ಯೆ ಗಣನೀಯವಾಗಿ ಏರುತ್ತಾ ಬಂದಿದೆ.



ಬರೀ ನಾಲ್ಕು ಗೋಡೆಗಳ ಮಧ್ಯೆ ಕೂತು ಅರ್ಧ ತೂಕಡಿಕೆಯಿಂದ ಇನ್ನರ್ಧ ಪರೀಕ್ಷೆಯಲ್ಲಿ ಪಾಸಗಬೇಕಲ್ಲ ಎಂದು ಪಾಠ ಕೇಳುತ್ತಿದ್ದ ನಮ್ಮ ಚಿಣ್ಣರು, ಇಲ್ಲಿನ ಹುಲಿಸಂರಕ್ಷಣಾ ಪ್ರದೇಶದ ಜೀವವೈವಿಧ್ಯವನ್ನು ತಿಳಿಯಲು ನಾವು ಆಯೋಜಿಸಿದ್ದ ಚಟುವಟಿಕೆಗಳಿಂದ ಅವರಲ್ಲಿ ಸುಪ್ತವಾಗಿದ್ದ ಚೈತನ್ಯವು ಮೊಳಕೆಯೊಡೆಯಿತು. ಮೊದಮೊದಲು "ಅಯ್ಯೋ ಏನ್ ಕ್ಯಾಂಪೊ. . . ಏನ್ ಮಾಡಕ್ ಕೆಲ್ಸ ಇಲ್ವೇನೋ ಇವ್ರ್ಗೆ. . .! ನಮ್ಮನ್ನ ಇಲ್ಲಿಗೆ ಕರ್ಕೊಂಡ್ ಬಂದ್ಬಿಟ್ಟಾರೆ" ಎಂದು ಗೊಣಗುತ್ತ ಬಸ್ಸಿಂದ್ದ ಇಳಿದ ಮಕ್ಕಳು, "ಇನ್ನೂ ಈ ಕ್ಯಾಂಪ್ ಒಂದೆರಡು ದಿನ ಇದ್ದಿದ್ದರೆ ಚೆನ್ನಾಗಿರೋದು. ಅಯ್ಯೋ. . ! ವಾಪಸ್ ಹೋಗ್ಲೇಬೇಕಾ." ಎಂದು ಹೊರಡುವಾಗ ಆಡುತ್ತಿದ್ದ ಮಾತುಗಳೇ ಸಾಕು, ಈ ಶಿಬಿರದ ಫಲಿತಾಂಶವೇಳಲು. ಅದರಲ್ಲೂ ಮಕ್ಕಳು ಅರಣ್ಯ ಅಧಿಕಾರಿಗಳ ಜೊತೆ ನೇರ ಸಂವಾದ ಮಾಡಿದ್ದು ಅವರಲ್ಲಿರುವ ಅರಣ್ಯದ ಬಗೆಗಿನ ಪ್ರೇಮವನ್ನು ಇಮ್ಮಡಿಗೊಳಿಸಿತು ಎಂದೇ ಹೇಳಬೇಕು. ಪುನಜನೂರು ವಲಯದ ವಲಯ ಅರಣ್ಯಾಧಿಕಾರಿಯಾಗಿದ್ದ ಚಂದ್ರುರವರು ಕಾರ್ಯಕ್ರಮವನ್ನು ಉದ್ಘಾಟಿಸಿ ಮಕ್ಕಳೊಂದಿಗೆ ಮಾತಾನಾಡಿದ ರೀತಿಯು ಅವರಲ್ಲಿನ ಅರಣ್ಯದ ಬಗ್ಗೆ ಇರುವ ಕಾಳಜಿಯನ್ನು ತೋರಿಸುತ್ತಿತ್ತು.




ಅವರು "1992ರಲ್ಲಿ ವೀರಪ್ಪನ್ ನನ್ನು ನೀವು ತಂಗಿರುವ ಮಹಾರಾಜಾ ಬಂಗ್ಲೇಯಲ್ಲಿ ಬಂದಿಸಿದ್ದರು. ಇಲ್ಲಿಂದ ತಪ್ಪಿಸಿಕೊಂಡ ಅವನು ಬಂದಿಸಿದ I.F.S ಅಧಿಕಾರಿಯನ್ನು ಬಲಿ ತೆಗೆದುಕೊಳ್ಳುತ್ತಾನೆ. ಆ ಅಧಿಕಾರಿಯ ಸಾಹಸಕ್ಕೆ ಭಾರತ ಸರ್ಕಾರ 'ವೀರಚಕ್ರ' ಎಂಬ ಪ್ರಶಸ್ತಿ ನೀಡಿ ಗೌರವಿಸಿದೆ. ಅವರ ಭಾವಚಿತ್ರವು ಬಂಗ್ಲೆಯಲ್ಲಿ ಇರುವುದನ್ನು ನೀವು ನೋಡಿರಬಹುದು." ಎಂಬುವುದನ್ನು ಕೇಳಿದ ಮಕ್ಕಳಿಗೆ ಅರಣ್ಯ ಪಾಲನೆ ಮಾಡುವುದು ಮುಳ್ಳಿನ ಹಾಸಿಗೆ ಇದ್ದಂತೆ ಎಂದು ಮನವರಿಕೆಯಾಗಿತ್ತು. ಎರಡು ದಿನಗಳ ಈ ಕಾರ್ಯಕ್ರಮದಲ್ಲಿ ಮಕ್ಕಳು ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡರು. ಅವರೆ ರಚಿಸಿ ಪ್ರದರ್ಶಿಸಿದ ನಾಟಕವು ಚಿಣ್ಣರಲ್ಲಿರುವ ಪ್ರತಿಭೆಯ ನಿದರ್ಶನವಾಗಿತ್ತು ಅದರಲ್ಲೂ ಕಾಡು ಪ್ರಾಣಿಗಳಿಗೆ ತೊಂದರೆಯೊದಗಿದಾಗ ಅವು ಅರಣ್ಯ ಅಧಿಕಾರಿಯ ಬಳಿ ಹೋಗಿ "ನಮನ್ನು ಕಾಪಾಡು ಸ್ವಾಮಿ." ಎಂದು ಕೇಳಿಕೊಳ್ಳುವ ಪರಿ, ಪ್ರಾಣಿಗಳಿಗೆ ಮಾನವನಿಂದ ಒದಗುತ್ತಿರುವ ಕಷ್ಟಗಳನ್ನು ಮಾತ್ರ ತೋರಿಸದೆ ಪ್ರಾಣಿಗಳ ಸಹಾಯಕ್ಕೆ ಬರುವವರು  ಅರಣ್ಯ ಇಲಾಖೆಯ ಸಿಬ್ಬಂದಿಯೇ ಎಂಬುದನ್ನು ಬಿಂಬಿಸುತ್ತಿತ್ತು. ಮುಂಜಾವಿನ ಚುಮುಚುಮು ಚಳಿಯಲಿ ಪಕ್ಷಿವೀಕ್ಷಣೆಯಲ್ಲಿ ಚಿಣ್ಣರು ತಾವೇ ಸ್ವಂತ ಪಕ್ಷಿಗಳನ್ನು ಸೂಕ್ಷ್ಮವಾಗಿ ಗುರುತಿಸುವ ರೀತಿಯನ್ನು ನೋಡಿ  ನಮ್ಮ ತಂಡದವರು ಈ ಮಕ್ಕಳಲ್ಲಿ ಎಷ್ಟು ಸೂಕ್ಷ್ಮ ಗ್ರಹಣಶಕ್ತಿಯಿದೆ ಆದರೆ ಈ ಪಠ್ಯಪುಸ್ತಕಗಳು ಇದನ್ನೆಲ್ಲ ಕೊಲ್ಲುತ್ತಿವೆಯಲ್ಲ ಎಂದು ಬೇಸರಗೊಂಡರು.

ಇನ್ನು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಲಿಂಗರಾಜುರವರು ತಮ್ಮ ಅವಿಶ್ರಾಂತ ಕೆಲಸದ ನಡುವೆಯೂ ಮಕ್ಕಳೊಂದಿಗೆ ಒಬ್ಬ ಶಿಕ್ಷಕರಂತೆ ಮಕ್ಕಳಿಗೆ ಕಾಡಿನ ವಿಧಗಳು, ಬೆಂಗಳೂರಿನಂತಹ ನಗರಗಳಿಗೆ ಜೀವಧಾರೆಯಾದ ನೀರಿನ ಮೂಲ, ಈ ಕಾಡುಗಳೇ ಎಂದು ಹೇಳಿದ್ದು ಮಕ್ಕಳಿಗೆ ಮರೆಯಲಾಗದ ಕ್ಷಣವಾಗಿತ್ತು. ಅಲ್ಲೇ ಸಾಲಿನಲ್ಲಿ ಕುಳಿತಿದ್ದ ವಿಧ್ಯಾರ್ಥಿನಿ ಎದ್ದು ನಿಂತು " ಸಾರ್ ನಾನು ನಿಮ್ತರಾ ಫಾರೆಸ್ಟ್ ಆಫೀಸರ್ ಅಗ್ಬೇಕಾದ್ರೆ ಏನ್ ಒದ್ಬೇಕ್ ಸಾರ್"  ಎಂದು ಕೇಳಿದ್ದು ಅರಣ್ಯ ಸಂರಕ್ಷಣಾಧಿಕಾರಿಗಳ ಸಂವಾದದ ಸಾರವನ್ನು ಹೇಳುತ್ತಿತ್ತು. ಈ ಶಿಬಿರಕ್ಕೂ, ಅರಣ್ಯದಲ್ಲಿ

ಸ್ವಚ್ಛಂದವಾಗಿ, ಸ್ವತಂತ್ರವಾಗಿ ಓಡಾಡುತ್ತಿದ್ದ ಜಿಂಕೆ, ಆನೆ, ಕರಡಿ ಮುಂತಾದವುಗಳನ್ನು ನೋಡುವ ಅವಕಾಶವನ್ನ ಅರಣ್ಯ ಇಲಾಖೆಯವರು ಸಫಾರಿ ಮೂಲಕ ಕಲ್ಪಿಸಿದ್ದರಿಂದ ಮಕ್ಕಳ ಆನಂದಕ್ಕೆ ಪುಷ್ಠಿ ನೀಡಿದಂತಾಯಿತು.

ಅಂತೂ ಈ ಎರಡು ದಿನದ ಪ್ರಕೃತಿ ಶಿಬಿರವು ಮಕ್ಕಳನ್ನು ಪ್ರಕೃತಿಯ ಮಡಿಲಿಗೆ ತಂದು ಬಿತ್ತಿರುವ ಪ್ರಕೃತಿ ಪ್ರೇಮವೆಂಬ ಬೀಜವು ಮೊಳೆತು ಹೆಮ್ಮರವಾದಾಗಲೇ ನಮ್ಮ ತಂಡದ ಪ್ರಯತ್ನ ಸಾರ್ಥಕ ಹೊಂದುವುದು ಹಾಗೂ ಅರಣ್ಯ ಇಲಾಖೆಯವರ ಈ ಅತ್ಯುತ್ತಮ ವಿಭಿನ್ನ ಆಲೋಚನೆಯು ಫಲಕಾರಿಯಾಗುವುದು.




ಚಂದ್ರು RFO ರವರು ಮಕ್ಕಳ ಪ್ರಶ್ನೆಗಳಿಗೆ ಉತ್ತರಿಸುತ್ತಿರುವುದು.



ಪ್ರಕೃತಿಯ ಮಡಿಲಲ್ಲಿ.



ಪ್ರಾಣಿ-ನಕಾಶೆ ಜೊಡಣೆ ಚಟುವಟಿಕೆ.



ತೊಗಟೆಯ ರಚನೆಯನ್ನು ಗುರುತಿಸುವಿಕೆ.



ಮರದ ಎತ್ತರ ಅಳೆಯುವ ಕಲಿಕೆ.



ಜೀವವೈವಿಧ್ಯ ವೀಕ್ಷಣೆಯಲ್ಲಿ ಮಕ್ಕಳು.



ಹಕ್ಕಿಗಳ ಹುಡುಕಾಟದಲ್ಲಿ ಒಂದು ಪಕ್ಷಿನೋಟ.



ಬುಡಕಟ್ಟು ಜನರ ಜೀವನ - ನಾಟಕದ ದೃಷ್ಯ.



ಸಫಾರಿ ಒಂದು ಸುತ್ತು.



ಕಾಡಿನಲ್ಲಿ ಮೆದು ನಡಿಗೆ.



ಕ್ಯಾಂಪ್ ಫೈರ್ ಪ್ರಾರ್ಥನೆ.



ಊಟದ ಸರದಿ.

- ನಾಗೇಶ್ .ಓ .ಎಸ್



# ಪರಾಗಸ್ಪರ್ಶಕಗಳೇ ಇಳುವರಿ ವರ್ಧಕಗಳು

ಬೆಳೆಯುತ್ತಿರುವ ಜನಸಂಖ್ಯೆ....ಅಲ್ಲ..ಅಲ್ಲ.."ಜನಸಂಖ್ಯಾ ಸ್ಫೋಟ". ಪ್ರಪಂಚದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯು, ಜೊತೆಗೆ ಹಸಿದ ಹೊಟ್ಟೆಗಳ ಸಂಖ್ಯೆಯನ್ನೂ ಸಹ ಹೆಚ್ಚಿಸುತ್ತಿದೆ. ಇದರ ಪರಿಣಾಮ ಕೇವಲ ಹಸಿವಲ್ಲದೆ, ಮುಂದಿನ ಪೀಳಿಗೆಯ ಉಳಿವಿಗೂ ಕುತ್ತಾಗಬಹುದಾದರಿಂದ ನಾವು ಹಾಗೂ ನಮ್ಮ ಕಿರುಬೆರಳಿಡಿದು ಬರುವ ಪೀಳಿಗೆಗೂ ಉತ್ತಮ ವಾತಾವರಣ ಸೃಷ್ಟಿಸುವುದು ನಮ್ಮೆಲ್ಲರ ಕೈಲಿದೆ.

ನಮ್ಮ ಜನಸಂಖ್ಯಾ ಉತ್ಪಾದನೆ ಹೀಗೆ ಮುಂದುವರಿದರೆ 2050ರ ಸುಮಾರಿಗೆ ನಮ್ಮ ಅನ್ನದಾತರು ಈಗಿನ ಇಳುವರಿಗಿಂತ ಎರಡು ಪಟ್ಟು ಹೆಚ್ಚು ಬೆಳೆಯಬೇಕಾಗುತ್ತದೆ. ಆದ್ದರಿಂದ ನಮ್ಮ ರೈತರಿಗೆ ಪೂರಕವಾಗಿ ವಿಜ್ಞಾನಿಗಳು ಈಗಿನ ಸಣ್ಣ-ಕೃಷಿಯಲ್ಲಿ ಹೆಚ್ಚು ಇಳುವರಿ ಕೊಡುವ ಒಂದು ಸ್ವಾಭಾವಿಕ ವಿಧಾನವನ್ನು ಕಂಡು ಹಿಡಿದಿದ್ದಾರೆ. ಈ ವಿಧಾನದಲ್ಲಿನ ಮುಖ್ಯ ಪಾತ್ರ ಪರಾಗಸ್ಪರ್ಶಕಗಳು (ಪರಾಗಸ್ಪರ್ಶಮಾಡಬಲ್ಲ ಕೀಟಗಳು). ಹೇಗೆ ಎಂಬ ಪ್ರಶ್ನೆ ಸಾಮಾನ್ಯ, ಹಾಗೆಯೇ ಉತ್ತರವೂ ತುಂಬಾ ಸರಳ. ನಾವು ಕೇವಲ ಕೃಷಿ ಭೂಮಿಯಲ್ಲಿನ ಪರಾಗಸ್ಪರ್ಶಕಗಳ ಸಂಖ್ಯೆಗಳನ್ನು ಹೆಚ್ಚಿಸಿದರೆ ಸಾಕು ಉಳಿದದ್ದು ತಾನಾಗಿಯೇ ಆಗುತ್ತದೆ. ಅದು ಹೇಗೆ ಅಂತೀರಾ..?ಮುಂದೆ ಓದಿ.




*ಕಾಫೀ ಗಿಡದ ಹೂ ಹಲವಾರು ಬಗೆಯ ಕೀಟಗಳನ್ನು ಆಕರ್ಷಿಸುತ್ತಿರುವುದು*

ಪರಾಗಸ್ಪರ್ಶಕಗಳ ಸಂಖ್ಯೆ ಹೆಚ್ಚಿಸಿದಂತೆ ಕೃಷಿಯಲ್ಲಿನ ಬೆಳೆಯ ಹೂಗಳಲ್ಲಿನ ಪರಾಗಸ್ಪರ್ಶ ಕ್ರಿಯೆಯನ್ನು ಹೆಚ್ಚಿಸಿದಂತಾಗುತ್ತದೆ. ಇದರ ಪರಿಣಾಮ ಹೆಚ್ಚು ಬೀಜೋತ್ಪಾದನೆ ಹಾಗೆಯೇ ಇಳುವರಿ. ಆದರೆ ಇವುಗಳ ಸಂಖ್ಯೆಯನ್ನು ಹೆಚ್ಚಿಸಿವುದು ಹೇಗೆ?



ಉತ್ತರ ಸುಲಭ, ಹಲವಾರು ಬೇರೆ ವಿಧದ ಸಸಿಗಳನ್ನು ಕೃಷಿ ಭೂಮಿಯ ಅಕ್ಕ ಪಕ್ಕದಲ್ಲಿ ನೆಡುವುದು, ಇದರಿಂದಾಗಿ ಬೇರೆ ಬೇರೆ ವಿಧದ ಹಾಗೂ ಹೆಚ್ಚು ಸಂಖ್ಯೆಯ ಕೀಟಗಳು ಆಕರ್ಷಿಸಲ್ಪಡುತ್ತದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ "ಬೇರೆ ಬೇರೆ ವಿಧದ ಕೀಟಗಳು" ಬರುವುದು ಮುಖ್ಯ. ಏಕೆಂದರೆ ಹೆಚ್ಚು ವಿಧದ ಕೀಟಗಳಿದ್ದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಪರಾಗಸ್ಪರ್ಶವಾಗುತ್ತದೆ. ಈ ವಿಧಾನವು ಎಷ್ಟರಮಟ್ಟಿಗೆ ಇಳುವರಿ ಹೆಚ್ಚಿಸುತ್ತದೆ ಎಂಬುದನ್ನು ತಿಳಿಯಲು ಒಂದು ಸಂಶೋದಕರ ಗುಂಪು ಏಷಿಯಾ, ಆಫ್ರಿಕಾ ಮತ್ತು ದಕ್ಷಿಣ ಅಮೇರಿಕ ಸುಮಾರು 344 ಕೃಷಿಭೂಮಿಗಳಲ್ಲಿ 33 ಬಗೆಯ ಬೆಳೆಗಳನ್ನು ಸೂಕ್ಷ್ಮವಾಗಿ ಅಧ್ಯಯಿನಿಸಿದ ನಂತರ ತಿಳಿದು ಬಂದದ್ದೇನೆಂದರೆ, ಸಣ್ಣ-ಕೃಷಿಭೂಮಿಗಳಲ್ಲಿ ಇಳುವರಿ ಗಂಭೀರವಾದ ಪರಿಮಾಣದಲ್ಲಿ ಹೆಚ್ಚಾಗಿಸಿವೆ. ಅಲ್ಲದೆ ದೊಡ್ಡ-ಕೃಷಿಭೂಮಿಗಳಲ್ಲೂ ಸಹ ಇವುಗಳ ಪಾತ್ರ ಮುಖ್ಯವಾಗಿವೆ. ಕಡಿಮೆ ಇಳುವರಿ ಕೊಡುವ ಕೃಷಿಭೂಮಿಗಳು ಸರಾಸರಿ ಶೇಕಡ 47ರಷ್ಟು ಇಳುವರಿ ತರಬಲ್ಲದು. ಈ ವಿಧಾನದಲ್ಲಿನ ಪ್ರಕಾರ ಈ ಇಳುವರಿ ಗಣನೀಯವಾಗಿ ಹೆಚ್ಚಿದೆ.

ಆದ್ದರಿಂದ ಕನಿಷ್ಟ ಇಲ್ಲಿನ ಈಚೆಗೆ ಕೇವಲ ಕೀಟನಾಶಕಗಳು, ಹೈಬ್ರಿಡ್ ಬೆಳೆಗಳಲ್ಲದೆ ಪರಿಸರದಲ್ಲಿನ ಸೂಕ್ಷ್ಮತೆ ಹಾಗೂ ಕೀಟ, ಸಸ್ಯಗಳ ಸಂಬಂಧಗಳನ್ನು ತಿಳಿದು ಕೃಷಿ ವಿಧಾನಗಳನ್ನು ಬದಲಿಸಿ ಅನುಸರಿಸಿದರೆ, ಪ್ರಪಂಚದಲ್ಲೇ ಬುದ್ಧಿಜೀವಿ ಎನಿಸಿಕೊಳ್ಳುವ ನಮ್ಮಿಂದ ಪರಿಸರವೂ ಉಳಿದೀತು, ನಾವೂ ಬಾಳೇವು.



- ಜೈಕುಮಾರ್ .ಆರ್



# ಕಣ್ಣಾಮುಚ್ಚಾರೆ

ಕಳೆದ ವಾರ ಓದಿನ ನಿಮಿತ್ತ ಒರಿಸ್ಸಾದ ಭುವನೇಶ್ವರ್ ಗೆ ಹೋಗಬೇಕಾಗಿ ಬಂತು. ಅಲ್ಲಿ ಬಂದು ಇಳಿದ ದಿನವೇ ಹಕ್ಕಿಗಳ ಕಲರವವು, ಅಲ್ಲಿ ಕಂಗೊಳಿಸುತ್ತಿದ್ದ ಹಸಿರು ಮರಗಳ ಪುಟ್ಟ ಜಗದೊಳಗೆ ಪಕ್ಷಿ ಸಂಕುಲವು ಸಮೃದ್ಧವಾಗಿರುವ ಸೂಚನೆಯನ್ನು ನೀಡಿದಂತೆ ತೋರಿತು.



"ಕುಟ್ರೂ.. ಕುಟ್ರೂ.." ಎಂದು ಮೊದಲ ದಿನ ಬೆಳಗಾಗುವ ಮೊದಲೇ ಸ್ವಲ್ಪ ದೂರದಲ್ಲಿ ಹಕ್ಕಿಗಳು ತಮ್ಮ ಇರುವಿಕೆಯ ಸುಳಿವನ್ನು ಕೊಟ್ಟಿತು. ಅಲ್ಲಿಗೆ ಹೋಗಿ ನೋಡಿದಾಗ ಇನ್ನೂ ಬೆಳಕು ಬಂದಿಲ್ಲದೆ ಇದ್ದುದರಿಂದ ಮಂಜಿನಲಿ ಇಷ್ಟು ಬೆಳಿಗ್ಗೆಯೇ ತಮ್ಮ ಚಟುವಟಿಕೆಯನ್ನು ಶುರುಮಾಡಿದ ಈ ಹಕ್ಕಿಗಳಾವುವು ಎಂಬುದು ತಿಳಿಯಲಿಲ್ಲ. ಹೀಗೆ ನಂತರದ ಎರಡು ದಿನಗಳಲ್ಲೂ ಅದು ಮುಂದುವರೆಯಿತು. ಕುತೂಹಲ ಇನ್ನು ತಡೆಯಲು ಸಾಧ್ಯವೇ ಇಲ್ಲವೆಂದೆನಿಸಿ, ಬೆಳಕು ಸಂಪೂರ್ಣ ಆವರಿಸುವವರೆಗೂ ಕಾಯೋಣವೆಂದು ನಿರ್ಧರಿಸಿದೆ. ಇನ್ನು ಕುತೂಹಲಕ್ಕೆ ತೆರೆಯೆಳೆಯಲು ಆ ದಿನ ಹಸಿರು ಎಲೆಗಳ ನಡುವೆ ಅತ್ತ-ಇತ್ತ ಕೊಂಬೆಯಿಂದ ಕೊಂಬೆಗೆ ಹಾರುವ ಎಲೆ ಹಸಿರು ಬಣ್ಣದ ದೊಡ್ಡ ಕುಟುರವೇ **(Brown headed barbet)** ಇದಾಗಿತ್ತು. ಸುಮಾರು ಐದು ಗಂಟೆಯಿಂದ ಏಳರವರೆಗೂ ಹಣ್ಣಿನ ಮರಕ್ಕೆ ಲಗ್ಗೆಯಿಟ್ಟು ಹೋಗುವುದು ಅವುಗಳ

ಸದ್ಯದ ಬೆಳಗಿನ ದಿನಚರಿ ಎಂಬುದು, ಹತ್ತು ದಿನ ಅವುಗಳನ್ನು ಮರೆಯಲ್ಲಿ ನೋಡಲು ಶುರುಮಾಡಿದಂದಿನಿಂದ ಖಾತ್ರಿಯಾಯಿತು.

ಬಾರ್ಬೆಟ್ ಗಳಲ್ಲೇ ಇದ್ದುದರಲ್ಲಿ ದೊಡ್ಡದೆನಿಸಿಕೊಂಡಿರುವ ಇವು ಕಣ್ಣಿನ ಸುತ್ತ ಹಳದಿ ಉಂಗುರವನ್ನು ಹೊಂದಿರುವ ಸುಂದರ ಪಕ್ಷಿ. ಸಣ್ಣ ಕತ್ತು, ಕಂದು ಬಣ್ಣದ ಸ್ವಲ್ಪ ದೊಡ್ಡ ತಲೆ, ಕೆಂಪು ಬಣ್ಣದ ಕೊಕ್ಕು, ಅದರ ಸುತ್ತಲೂ ಮೀಸೆ, ಮೈ ತುಂಬಾ ಹಸಿರು ಗರಿಗಳನ್ನು ಆಕರ್ಷಕವಾಗಿ ಹೊಂದಿರುವ ಇವುಗಳಲ್ಲಿ ಹೆಣ್ಣು ಗಂಡುಗಳೆರೆಡೂ ಹೆಚ್ಚು ಕಡಿಮೆ ನೋಡಲು ಒಂದೇ ತರಹ ಎಂದೆನಿಸುತ್ತದೆ. ಅಲ್ಲದೆ ಮರದ ಪೊಟರೆಗಳನ್ನೇ ತಮ್ಮ ಗೂಡುಗಳನ್ನಾಗಿ ಮಾಡಿಕೊಳ್ಳುತ್ತದೆ. ಮಲೆನಾಡಿನಲ್ಲಿ ಸಾಮಾನ್ಯವಾಗಿ ಕಂಡುಬರುವ ಸಣ್ಣಕುಟುರ **(White cheeked barbet)** ಗಳಂತೆ ಕೂಗಿದರೂ, ನೋಡಲು ಅವುಗಳಿಗಿಂತ ಸ್ವಲ್ಪ ಭಿನ್ನವಾಗಿದೆ.

ಕದುಗನ ಹಕ್ಕಿ, ಕಾಜಾಣ, ಮೈನಾ, ಕಾಡು ಚಿಕ್ಕಗಳ ಸದ್ದು ಇಡೀ ದಿನ ನಾನಿದ್ದ ಜಾಗದ ಸುತ್ತಲೂ ಕೇಳಿ ಬರುತ್ತಿತ್ತು. ನೀರವತಯೇ ಮನೆಮಾಡಿದ್ದ ಆ ತಾಣವು ನಗರದ ಮಧ್ಯೆಯೂ ಹಕ್ಕಿಗಳು ನಿರ್ಭಯವಾಗಿ ತಮ್ಮದೇ ಲೋಕದಲ್ಲಿ ಮುಳುಗಿರಲು ಹೇಳಿ ಮಾಡಿಸಿದಂತಿತ್ತು. ಇತರೆ ಕೆಲವು ಬಾರ್ಬೆಟ್ ಗಳನ್ನು ಮುಂಚೆ ನೋಡಿದ್ದ ನನಗೆ ಅಲ್ಲಿಂದ ಕೊನೆಗೆ ಬರುವಾಗ ಈ ಕುಟುರವು ಹೊಸ ರೀತಿಯ ರೋಮಾಂಚನವನ್ನು ನೀಡಿದ್ದಂತೂ ಹೌದು.



- ಸ್ಮಿತಾ ರಾವ್
ಶಿವಮೊಗ್ಗ

# ಇಂಗಾಲ

ಕಾಂತಶಕ್ತಿಯಿಂದ ಗ್ರಹರಚನೆಯಿಂದ
ಭೂಗರ್ಭದಿಂದ ಅಗ್ನಿಪರ್ವತದಿಂದ
ಉಲ್ಕೆಗಳಿಂದ ಜೀವ ಉಗಮದಿಂದ
ಅನಂತ ಕ್ರಿಯೆಗಳ ರೂಪವಾಗಿ ಒಂದೇ
ಶ್ವಾಸವಾಗಿ ಸಸ್ಯಕ್ಕೆ ದ್ಯುತಿಯಾಗಿ

ಪ್ರಾಣಿ ಪಕ್ಷಿಗಳಿಗೆ ಆಹಾರವಾಗಿ
ಭಕ್ಷಗಳಿಗೆ ಭೋಜನವಾಗಿ
ಜಡ ಜನ್ಯಗಳಿಂದ ಮಣ್ಣಾಗಿ

ಜೈವಿಕವಾಗಿ ವರ್ಣ ವರ್ಧನವಾಗಿ
ಅಗ್ನಿಗೆ ಇಂಧನವಾಗಿ ವಜ್ರವಾಗಿ
ನೈಸರ್ಗಿಕ ಅನಿಲ ಸಂಪನ್ಮೂಲವಾಗಿ
ಪರಿವರ್ತಿತ ಶಕ್ತಿಯ ಆಗರವಾಗಿ

ವಿಷ ಅನಿಲವಾಗಿ ಜೀವಧಾತುವಾಗಿ
ಸಕಲ ಸಂಯೋಜನೆಯ ಮೂಲವಾಗಿ
ಅಸಂಖ್ಯಾ ವಿಧರೂಪವಾಗಿ
ಜಾಗತಿಕ ತಾಪದ ಮೂಲವಾಗಿ

ಇಂಗಾಲ ಶಕ್ತಿಯ ಮೂಲವಾಗಿ
ಭೂಮಿಯ ವೈವಿಧ್ಯತೆಯಾಗಿ
ಅಣುಅಣುವಿನ ಕಣವಾಗಿ
ಅನಂತ ವಿಸ್ಮಯದ ಗೂಡಾಗಿದೆ.

- ಕೃಷ್ಣನಾಯಕ್

# ಪ್ರಕೃತಿ ಬಿಂಬ



ಈ ಸುಂದರ ಭೂವಿಯಲ್ಲಿ  ಮನುಷ್ಯನದ್ದೆ ಈ ಕ್ರೂರ ಕೃತ್ಯ! .




ಈ ಸುಂದರ ಹುಲ್ಲುಗಾವಲು ಸ್ವರ್ಗದ ಬಾಗಿಲು!

- ಕಾರ್ತಿಕ್ .ಎ .ಕೆ